ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ಲಾಕ್‌ಡೌನ್‌ನಿಂದ ರಾಜ್ಯದಲ್ಲಿ ಜಿಎಸ್‌ಟಿ ನಿವ್ವಳ ಸಂಗ್ರಹಣೆಯಲ್ಲಿ ಖೋತಾ

ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು):-

392(408) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಲಾಕ್‌ಡೌನ್‌ನಿಂದ ರಾಜ್ಯದಲ್ಲಿ ಜಿಎಸ್‌ಟಿ ನಿವ್ವಳ ಸಂಗ್ರಹಣೆಯಲ್ಲಿ ಖೋತಾ ಆಗಿರುವುದು ನಿಜವೇ; (ಪೂರ್ಣ ಮಾಹಿತಿ ನೀಡುವುದು)

(ಆ) ಈ ತೆರಿಗೆ ಸಂಗ್ರಹಣೆ ಖೋತಾವನ್ನು ನೀಗಿಸಲು ಕೇಂದ್ರ ಸರ್ಕಾರ ಸೂಚಿಸಿರುವ ಮಾರ್ಗೋಪಾಯಗಳೇನು; (ವಿವರಗಳನ್ನು ಒದಗಿಸುವುದು)

(ಇ) ಕೇಂದ್ರ ಸರ್ಕಾರದ ಮಾರ್ಗೋಪಾಯಗಳಲ್ಲಿ ರಾಜ್ಯ ಸರ್ಕಾರ ಅನುಸರಿಸಿರುವ ಅಥವಾ ಆಯ್ದುಕೊಂಡಿರುವ ಮಾರ್ಗೋಪಾಯಗಳು ಯಾವುವು; (ಪೂರ್ಣ ಮಾಹಿತಿ ನೀಡುವುದು)

(ಈ) ಈ ಮಾರ್ಗೋಪಾಯದ ರೀತ್ಯಾ ರಾಜ್ಯ ಸರ್ಕಾರ ವಾಣಿಜ್ಯ ಬ್ಯಾಂಕ್‌ಗಳಿಂದ/ಭಾರತೀಯ ರಿಸರ್ವ್ ಬ್ಯಾಂಕ್‌ನಿಂದ ಪಡೆಯುತ್ತಿರುವ ಸಾಲವೆಷ್ಟು; ಈ ಸಾಲಗಳ ಮಂಜೂರಾತಿಯಲ್ಲಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ನಿರ್ವಹಿಸ ಬೇಕಾಗಿರುವ ನಿಬಂಧನೆಗಳೇನು; (ವಿವರ ನೀಡುವುದು)

(ಉ) ವಾಣಿಜ್ಯ ಬ್ಯಾಂಕ್/ಭಾರತೀಯ ರಿಸರ್ವ್ ಬ್ಯಾಂಕ್‌ನಿಂದ ಪಡೆಯುವ ಸಾಲಗಳಲ್ಲಿ ಇಲಾಖಾವಾರು ಹಂಚಿಕೆಯ ವಿವರ ನೀಡುವುದು; ಈ ಹಂಚಿಕೆಯಲ್ಲಿ ಕೇವಲ ನೀರಾವರಿ ಇಲಾಖೆಗೆ ಅತಿ ಹೆಚ್ಚು ಹಂಚಿಕೆಯಾಗಲು ಕಾರಣವೇನು; ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ಇತರೆ ಇಲಾಖೆಗಳಾದ ಗ್ರಾಮೀಣಾಭಿವೃದ್ಧಿ, ನಗರಾಭಿವೃದ್ಧಿ, ಲೋಕೋಪಯೋಗಿ ಮತ್ತು ಸಣ್ಣ ನೀರಾವರಿ ಇಲಾಖೆಗಳನ್ನು ಕಡೆಗಣಿಸಲು ಕಾರಣವೇನು? (ಸಂಪೂರ್ಣ ಮಾಹಿತಿ ನೀಡುವುದು)